ಡಾ॥ ಕೆ. ಪಿ. ಪೂಣಚ್ಚ ಮತ್ತು ಎಸ್. ವಿ. ವೆಂಕಟೇಶಯ್ಯ*

# ಹಂಪಿಯ ಇತ್ತೀಚಿನ ಉತ್ಖನನದಲ್ಲಿ ದೊರೆತ ಮುದ್ರೆಗಳು

ಮುದ್ರೆಗಳು ಸಿಂಧೂಕಂದರ ನಾಗರೀಕತೆಗಳ ಕಾಲದಷ್ಟು ಪ್ರಾಚೀನ. ಈ ಮುದ್ರೆಗಳ ಉಪಯೋಗ ಮತ್ತು ಅದರ ಮೇಲಿನ ಲಿಪಿಯ ಬಗ್ಗೆ ಅನೇಕ ವಾದ-ವಿವಾದಗಳಿದ್ದರೂ ಇವು ಆ ಕಾಲದ ಇತಿಹಾಸದ ಪುನ ರ್ರಚನೆಯಲ್ಲಿ ತಮ್ಮದೇ ಆದ ಕೀಲಕ ಪಾತ್ರವನ್ನು ನಿರ್ವ ಹಿಸಿದ್ದು, ಮುಖ್ಯ ಆಕರ ಸಾಮಗ್ರಿಗಳೆನ್ನುವ ಅಂಶ ಮಾತ್ರ ನಿರ್ವಿವಾದದ್ದು. ಉತ್ತರ ಭಾರತದಲ್ಲಿ ಇತಿ ಹಾಸ ಯುಗದ ಆರಂಭ ಕಾಲದಿಂದ ಸುಮಾರು ಹತ್ತ ನೆಯ ಶತಮಾನದವರೆಗೆ ವಿವಿಧ ಕಾರ್ಯಗಳಿಗಾಗಿ ಉಪ ಯೋಗವಾಗುತ್ತಿದ್ದ ಅನೇಕ ರೀತಿಯ ಮುದ್ರೆಗಳು ಬೆಳ ಕಿಗೆ ಬಂದಿದ್ದರೂ, ದಕ್ಷಿಣ ಭಾರತದಲ್ಲಿ ಇವು ತೀರ ಕಡಿಮೆ. ಪ್ರಾಮಾಣ್ಯದ ಖಾತರಿಗಾಗಿ ವಿವಿಧ ರೀತಿ ಯಲ್ಲಿ ಉಪಯೋಗಿಸಲಾಗಿರುವ ಮುದ್ರೆಗಳು ಬಹು ಮುಖ್ಯವಾಗಿದ್ದರೂ, ವಿಜಯನಗರದ ಕಾಲಕ್ಕೆ ಸಂಬಂಧಿ ಸಿದಂತೆ ಇವುಗಳ ಲಭ್ಯ ಬೆರಳೆಣಿಕೆಯಷ್ಟು.

ಹಂಪಿ ರಾಷ್ಟ್ರೀಯ ಯೋಜನೆಯ ಅಂಗವಾಗಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯು, ಹಂಪಿಯ 'ರಾಜಾಂಗಣ' ಪ್ರದೇಶದಲ್ಲಿ ನಡೆಸಲಾದ ಸುಮಾರು ಒಂದು ದಶಕಕ್ಕೂ ಹೆಚ್ಚಿನ ಕಾಲದ ಉತ್ಖನ ನದಲ್ಲಿ ಇದುವರೆವಿಗೂ 59,000 ಚ. ಮಿ. ಗಳ ಸ್ಥಳ ವನ್ನು ವೈಜ್ಞಾನಿಕ ರೀತ್ಯ ಪರಿಶೋಧಿಸಲಾಗಿದೆ. ಈ ಉತ್ಖನನದಿಂದಾಗಿ ಅನೇಕ ರೀತಿಯ ಕಟ್ಟಡಗಳ ತಲ ವಿನ್ಯಾಸವು ತಿಳಿಯುವಂತಿದ್ದು ನಿಖರವಾಗಿ ಗುರುತಿಸ ಬಹುದಾದ ಅರಮನೆಯ ಸಂಕೀರ್ಣ, ಕಾವಲುಗಾರರ ಮನೆ, ಉಗ್ರಾಣಗಳಲ್ಲದೇ ಜಲ ಪೂರೈಕೆ ಮತ್ತು ಒಳ ಚರಂಡಿ ವ್ಯವಸ್ಥೆ ಇತ್ಯಾದಿಗಳನ್ನು ಕುರಿತಂತೆ ಸೂಕ್ತ ಮಾಹಿತಿ ದೊರೆತಿದೆ. ಜೊತೆಗೆ ವಿವಿಧ ರೀತಿಯ ಶಿಲೆ, ಸುಟ್ಟ ಮಣ್ಣು, ಗಚ್ಚು-ಗಾರೆ ಮುಂತಾದ ಮಾಧ್ಯಮ ಗಳಲ್ಲಿ ರೂಪಿಸಲಾದ ನೂರಾರು ಪ್ರಾಚ್ಯ ಅವಶೇಷಗಳು ಬಗೆ ಬಗೆಯ ನಾಣ್ಯಗಳು, ಒಡವೆ ಮತ್ತು ವೈವಿಧ್ಯಮ ಯವಾದ ಮಣ್ಣಿನ ಪಾತ್ರೆಗಳೂ ದೊರೆತಿವೆ. ಇಂತಹ ಅನೇಕ ಪ್ರಾಚ್ಯ ವಸ್ತು ವಿಶೇಷಗಳಲ್ಲಿ ಸುಟ್ಟ ಮಣ್ಣಿನ ಹಾಗೂ ಕಲ್ಲಿನ ಮುದ್ರೆಗಳು ಮಹತ್ವದ್ದಾಗಿವೆ.

ಈಗಾಗಲೆ ನಮಗೆ ತಿಳಿದಿರುವಂತೆ ಮುದ್ರೆಯು ನಮ್ಮ ಇತಿಹಾಸ ಮತ್ತು ಸಂಸ್ಕೃತಿಯ ರಚನೆಗೆ ಪ್ರಾಥ ಮಿಕ ಆಕರಗಳಾಗಿ ಕಲೆ, ಪ್ರತಿಮಾ ಲಕ್ಷಣ, ವ್ಯಾಪಾರ ಮತ್ತು ವಾಣಿಜ್ಯ, ಅರಸರ ಕಾಲ ಹಾಗೂ ಆಡಳಿತಗಳ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲಿದೆ. 'ರಾಜಾಂಗಣ' ಮತ್ತು ರಾಜಾಂಗಣದ ಸುತ್ತಮುತ್ತಲಿನ ಪ್ರದೇಶಗಳಲ್ಲಿ

* 1. ಸೂಪರಿಂಡೆಂಟ್, ಭಾರತೀಯ ಪುರಾತತ್ವ ಸರ್ವೇಕ್ಷಣಾಲಯ, 364, 36ನೆಯ 'ಎ' ಅಡ್ಡರಸ್ತೆ, ನಾಲ್ಕನೆಯ 'ಟಿ' ಬ್ಲಾಕ್, ಜಯನಗರ ಬೆಂಗಳೂರು-560041.

2. ಡೆಪ್ಯೂಟಿ ಸೂಪರಿಂಡೆಂಟ್, ಭಾರತೀಯ ಪುರಾತತ್ವ ಸರ್ವೇಕ್ಷಣಾಲಯ, —,,—

ವಿಶೇಷವಾಗಿ ಉತ್ತರದ ಕಡೆ ನಡೆಸಿದ ಉತ್ಖನನದಲ್ಲಿ ಮೂರು ಮುದ್ರೆಗಳು ದೊರೆತಿವೆ. ಈ ಮುದ್ರೆಗಳು ಶಂಖುವಿನಾಕಾರದಲ್ಲಿದ್ದು, ಕಪ್ಪು ಮತ್ತು ಬೂದು ಬಣ್ಣಗಳ ಮಿಶ್ರಣದವಾಗಿದ್ದು, ಅಧಿಕ ಉಷ್ಣೋಗ್ರತೆಯಲ್ಲಿ ಸುಡಲಾಗಿದೆ. ಇವುಗಳು ೧೦ ಸೆಂ. ಮೀ. ನಿಂದ $1\frac{1}{2}$ ಮೀಟರಿನ ಆಳದಲ್ಲಿ ದೊರೆತಿದ್ದು ಮುದ್ರೆಗಳ ತಳಭಾಗದಲ್ಲಿ ೧ ಸೆಂ. ಮೀ ನಿಂದ ೪ ಸೆಂ. ಮೀ.ಗಳ ವ್ಯಾಸವನ್ನು ಹೊಂದಿವೆ. ಸಾಮಾನ್ಯವಾಗಿ ಮುದ್ರೆಗಳ ತಳಭಾಗವು ಸಮತಟ್ಟಾಗಿದ್ದು ಅದರ ಮೇಲೆ ಮೂರು ಭಾಗಗಳಲ್ಲಿ ಕೆತ್ತನೆಯನ್ನು ಕಾಣಬಹುದಾಗಿದೆ. ಮೊದಲ ಅಥವಾ ಮೇಲಿನ ಭಾಗವು ಕಠಾರಿಯ ಕೆತ್ತನೆಯನ್ನು ಹೊಂದಿದ್ದು, ಅದರ ಹಿಡಿಯು ಮೇಲ್ಮುದಿಯಲ್ಲಿದೆ. ಈ ಕಠಾರಿಯ ಇಕ್ಕೆಲಗಳಲ್ಲಿ ಸೂರ್ಯ ಮತ್ತು ಚಂದ್ರರ ಕೆತ್ತನೆಯಿದ್ದು ವಿಜಯನಗರದ ಅರಸರ ರಾಜ ಲಾಂಛನವನ್ನು ಹೋಲುತ್ತದೆ. ಎರಡನೆಯ ಅಥವ ಮಧ್ಯ ಭಾಗವು 'ಶ್ರೀ ವಿರಬು' ಎಂಬ ಅಕ್ಷರಗಳನ್ನು ಹೊಂದಿದ್ದು ತಳಭಾಗವು ಅಥವಾ ಕೊನೆಯ 'ಕರಾಯ' ಎಂಬ ಅಕ್ಷರಗಳನ್ನು ಹೊಂದಿದ್ದು ; ಕೂಡಿಸಿದಾಗ 'ಶ್ರೀವಿರಬುಕರಾಯ' ಎಂಬುದಾಗಿ ಓದಬಹುದಾಗಿದ್ದು ವಿಜಯನಗರದ ಅರಸರ ಕಾಲದ ನಾಣ್ಯಗಳ ಒಂದು ಮುಖವನ್ನು ಹೋಲುತ್ತವೆ. ಆದರೆ ವಿಜಯನಗರದ ಕಾಲದ ನಾಣ್ಯಗಳಂತೆ ಮುದ್ರೆಗಳು ಕಲಾತ್ಮಕ ಅಂಚನ್ನು ಹೊಂದಿರುವುದಿಲ್ಲ. ಅಕ್ಷರಗಳು ನಾಗರ ಲಿಪಿಯಲ್ಲಿದ್ದು ಶೈಲಿಯ ದೃಷ್ಟಿಯಿಂದ ಕ್ರಿ.ಶ. ೧೪ನೇ ಶತಮಾನದ ಲಿಪಿಯಂತಿದ್ದು ಒಂದನೇ ಬುಕ್ಕರಾಯನ ಕಾಲದ ಚಿನ್ನದ ಮತ್ತು ತಾಮ್ರದ ನಾಣ್ಯಗಳ ಮೇಲ್ಮುಖದಲ್ಲಿ ಕಾಣುವ ಆಖ್ಯಾಯಿಕೆಯನ್ನು ಹೋಲುತ್ತದೆ.

ಅಂದಿನ ದಿನಗಳಲ್ಲಿ ಅರಮನೆಯ ಪ್ರವೇಶ ಅಥವಾ ಕಾರ್ಯಸದನದ ಪ್ರವೇಶ ಬಹಳ ಪ್ರಯಾಸಕರವಾಗಿತ್ತೆಂದು ನಮ್ಮ ದೇಶದ ಮಹಾಕಾವ್ಯಗಳಲ್ಲೊಂದಾದ ಮಹಾಭಾರತದಲ್ಲಿಯೂ ಮತ್ತು ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ಉಲ್ಲೇಖಿಸಲಾಗಿದೆ. ಅದರಲ್ಲೂ ದ್ವಿತೀಯ ಯಾಮದಲ್ಲಿ ಪ್ರವೇಶ ಬಯಸುವುದು ಇನ್ನೂ ಕಷ್ಟಕರವಾಗಿತ್ತು. ಆಡಳಿತಾತ್ಮಕ ದೃಷ್ಟಿಯಿಂದಲೂ ಮತ್ತು ರಕ್ಷಣಾತ್ಮಕ ದೃಷ್ಟಿಯಿಂದಲೂ ಅಂತಹ ಪ್ರವೇಶ ಬಯಸುವ ಯಾರನ್ನೇ ಆಗಲಿ ಕಟ್ಟುನಿಟ್ಟಿನ ತಪಾಸಣೆಗೆ ಒಳಪಡಿಸುತ್ತಿದ್ದರು. ತುರ್ತು ಪರಿಸ್ಥಿತಿಯಲ್ಲಂತೂ ಈ ತಪಾಸಣೆಯು ಮತ್ತಷ್ಟು ಬಿಗಿಯಿಂದ ಕೂಡಿರುತ್ತಿತ್ತು ಈ ಬಗ್ಗೆ ವಿದೇಶಿಯಾತ್ರಿಕರಾದ ನ್ಯೂನಿಜ್, ಅಬ್ದುಲ್ ರಜಾಕ್, ಡಾಮಿಂಗೊ ಪಾಯೆಶ್ ಮುಂತಾದವರ ಬರವಣಿಗೆಗಳಲ್ಲಿ ಉಲ್ಲೇಖವಿದ್ದು, (ತಡೆಗೋಡೆ) ಪರದೆ ಗೋಡೆಗಳ ವಂಕಿಯಾದ ಪ್ರವೇಶದ್ವಾರದಿಂದ ಈ ವಿಷಯಕ್ಕೆ ಮತ್ತಷ್ಟು ಪುಷ್ಟಿ ದೊರೆತಿದೆ.

ಅರಸನ ಕಾರ್ಯಕಾರಿ ಸದನದಲ್ಲಿ ರಾಜಾಜ್ಞೆಗಳನ್ನು ಅಥವಾ ಶಾಸನಗಳನ್ನು ಅಧಿಕೃತವಾಗಿ ವಿಧಿವತ್ತಾಗಿ ಹೊರಡಿಸಲು ಮುದ್ರೆಗಳನ್ನು ವಿಶೇಷವಾಗಿ ಬಳಸುತ್ತಿದ್ದರು. ಉತ್ಖನನದಲ್ಲಿ ದೊರೆತ ಅಪಾರ ಸಂಖ್ಯೆಯ ಬಳಪದ ಕಲ್ಲಿನ ಕಡ್ಡಿಗಳನ್ನು 'ಕಡಿತ'ಗಳನ್ನು ಬರೆಯಲು ಉಪಯೋಗಿಸುತ್ತಿದ್ದರು. ಸಹಜವಾಗಿಯೇ ಪ್ರತಿಯೊಂದು ಕಡಿತವು 'ದೊರೆ' ಅಥವಾ ಆತನ ಪ್ರತಿನಿಧಿ ಅಧಿಕಾರಿಗೂ ಪರಿಶೀಲನೆಗೊಳಪಟ್ಟಿದ್ದುದರ ಕುರುಹಾಗಿ ರಾಜಮುದ್ರೆಯನ್ನು ಹೊಂದಿರುತ್ತಿದ್ದುವು.

ಈ ಮುದ್ರೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಿಶೇಷವಾಗಿ ಶಂಖುವಿನಾಕಾರದ ಮುದ್ರೆಗಳ ಹಿಡಿಯು ಮರದ ಅಥವಾ ದಂತದ ಕೈಪಿಡಿಯನ್ನು ಹೊಂದಿತ್ತೆಂಬುದಾಗಿ ತಿಳಿಯಬಹುದಾಗಿದೆ. ಬಳೆಗಳು, ಮಣಿಗಳು, ಬೊಟ್ಟುಗಳು, ಮೂಗುತಿ ಇತ್ಯಾದಿಗಳು ಚಿನ್ನದ ಹಾಳೆಗಳ ಹೊದಿಕೆಯಿರುವ ಆಭರಣಗಳು ಸಾಕಷ್ಟು ಸಂಖ್ಯೆಯಲ್ಲಿ ದೊರೆತಿರುವುದರಿಂದ ಮುದ್ರೆಗಳ ಕೈಪಿಡಿಗೆ ತೆಳುವಾದ ಚಿನ್ನದ ಹೊದಿಕೆಯೊಂದಿಗೆ ಉಪಯೋಗಿಸುತ್ತಿದ್ದರೆಂಬ ಸಾಧ್ಯತೆಯನ್ನು ತಳ್ಳಿಹಾಕಲಾಗದು.

ಈ ರಾಜ ಮುದ್ರೆಗಳು ಮೇಲೆ ತಿಳಿಸಿದ ಸ್ಥಳದಲ್ಲಿ ದೊರೆತಿವೆಯಾದ್ದರಿಂದ ಅಲ್ಲಿದ್ದಂತಹ ಆಡಳಿತಾತ್ಮಕ ಹಾಗೂ ರಕ್ಷಣಾತ್ಮಕ ಕಟ್ಟಡಗಳ ಕಲ್ಪನೆಯನ್ನು ಸ್ಪಷ್ಟ ಪುರಾವೆಯೊಂದಿಗೆ ಪಡೆಯಬಹುದಾಗಿದೆ.